# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೨<br>Volume 152 | ಬೆಂಗಳೂರು, ಗುರುವಾರ, ಫೆಬ್ರವರಿ ೧೬, ೨೦೧೭ (ಮಾಘ ೨೭, ಶಕ ವರ್ಷ ೧೯೩೮)<br>Bengaluru, Thursday, February 16, 2017 (Magha 27, Shaka Varsha 1938 | ಸಂಚಿಕೆ ೭<br>Issue 7 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಂಸದೀಯ ವ್ಯವಹಾರಗಳ ಸಚಿವಾಲಯ

**ವಿಷಯ:** ಶ್ರೀ ಅಬ್ದುಲ್ ಗಫಾರ್, ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ, ವಿರುದ್ಧದ ಇಲಾಖಾ ಶಿಸ್ತು ನಡವಳಿಗಳಲ್ಲಿ ವಾಗ್ದಂಡನೆ ವಿಧಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಎಂಡಬ್ಲ್ಯೂಡಿ 516 ಎಂಡಿಎಸ್ 2012, ದಿನಾಂಕ: 16.03.2013
2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಇವರ ಅಧಿಕೃತ ಜ್ಞಾಪನ ಸಂಖ್ಯೆ: ಎಂಡಬ್ಲ್ಯೂಡಿ 516 ಎಂಡಿಎಸ್ 2012, ದಿನಾಂಕ: 16.03.2013
3. ಶ್ರೀ ಅಬ್ದುಲ್ ಗಫಾರ್ ಇವರ ಮುಚ್ಚಳಿಕೆ ಪತ್ರ ದಿನಾಂಕ: 16.05.2013
4. ಸರ್ಕಾರದ ಕಾರ್ಯದರ್ಶಿಗಳು, ಸಂಸದೀಯ ವ್ಯವಹಾರಗಳ ಇಲಾಖೆ ರವರ, ಅ.ಸ ಪತ್ರ ಸಂ:ಸಂವ್ಯಶಾಇ 41 ಭಾನಿವಿ 2014, ದಿನಾಂಕ:27.09.2014 ಹಾಗೂ 10.12.2015
5. ಸರ್ಕಾರದ ಅಧಿಸೂಚನೆ ಸಂಖ್ಯೆ: ಎಂಡಬ್ಲ್ಯೂಡಿ 195 ಎಂಡಿಎಸ್ 2014, ದಿನಾಂಕ: 19.05.2015
6. ಭಾಷಾಂತರ ನಿರ್ದೇಶನಾಲಯದ ಅಧಿಕೃತ ಜ್ಞಾಪನ ಸಂಖ್ಯೆ: ಭಾನಿ 9/ಆಡಳಿತ/ನಿಯೋಜನೆ/2013, ದಿನಾಂಕ: 22.06.2015 ಮತ್ತು 13.07.2015
7. ಭಾಷಾಂತರ ನಿರ್ದೇಶನಾಲಯದ ಸರ್ಕಾರಿ ಆದೇಶ ಸಂಖ್ಯೆ: ಭಾನಿ 9 /ಆಡಳಿತ/ ನಿಯೋಜನೆ/2013, ದಿನಾಂಕ: 02.09.2015
8. ಅಲ್ಪ ಸಂಖ್ಯಾತರ ನಿರ್ದೇಶನಾಲಯದ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಅಸಂನಿ/ಜಿ.ಅ/ಸಿಆರ್–13/2012 ದಿನಾಂಕ: 10.09.2015
9. ಸರ್ಕಾರದ ಪತ್ರ ಸಂಖ್ಯೆ: ಸಂವ್ಯಶಾಇ 41 ಭಾನವಿ 2014 ದಿನಾಂಕ: 09.11.2015
10. ಭಾಷಾಂತರ ನಿರ್ದೇಶನಾಲಯದ ಪತ್ರ ಸಂಖ್ಯೆ: ಭಾನಿ 9/ಆಡಳಿತ/ನಿಯೋಜನೆ/2013, ದಿನಾಂಕ: 26.11.2015
11. ಸರ್ಕಾರಿ ಆದೇಶ ಸಂಖ್ಯೆ: ಭಾನಿ 9/ಆಡಳಿತ/ನಿಯೋಜನೆ/2013, ದಿನಾಂಕ: 09.12.2015
12. ಭಾನಿ 09/ಆಡಳಿತ/ನಿಯೋಜನೆ/2013 ದಿನಾಂಕ: 21.12.2015
13. ವಿಚಾರಣಾಧಿಕಾರಿಗಳ ವರದಿ ದಿನಾಂಕ: 20.05.2016
14. ಕಾರಣ ಕೇಳುವ ನೋಟೀಸ್ ಸಂಖ್ಯೆ: ಭಾನಿ 9/ ಆಡಳಿತ/ ನಿಯೋಜನೆ/2013 ದಿನಾಂಕ: 21.05.2016
15. ಸರ್ಕಾರಿ ಆದೇಶ ಸಂಖ್ಯೆ: ಭಾನಿ 9/ಆಡಳಿತ/ನಿಯೋಜನೆ/2013, ದಿನಾಂಕ: 30.06.2015
16. ಸರ್ಕಾರದ ಪತ್ರ ಸಂಖ್ಯೆ: ಭಾನಿ/9/ಆಡಳಿತ/ನಿಯೋಜನೆ/2013, ದಿನಾಂಕ: 15.07.2016

**ಪ್ರಸ್ತಾವನೆ**

ಶ್ರೀ ಅಬ್ದುಲ್ ಗಫಾರ್, ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು ಇವರನ್ನು ಮೇಲೆ ಓದಲಾದ ಉಲ್ಲೇಖ(1) ರ ಪತ್ರದ ಅನ್ವಯ ಇವರ ಸ್ವಂತ ವೇತನ ಶ್ರೇಣಿಯಲ್ಲಿ ಒಂದು ವರ್ಷದ ಅವಧಿಗೆ ಜಿಲ್ಲಾ ಅಧಿಕಾರಿ, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ನಗರ ಜಿಲ್ಲೆ ಇಲ್ಲಿಗೆ ಕೆಸಿಎಸ್ಆರ್ ನಿಯಮಾವಳಿಯ ನಿಯಮ 50(1) ರನ್ವಯ ನೇಮಿಸಲಾಗಿತ್ತು.

ಓದಲಾದ ಆದೇಶ (2) ರಲ್ಲಿ ಸೂಚಿಸಿದ ಮೇರೆಗೆ ಉಲ್ಲೇಖಿತ(3)ರ ಮುಚ್ಚಳಿಕೆಯಲ್ಲಿ ಶ್ರೀ ಅಬ್ದುಲ್ ಗಫಾರ್ ಇವರು ಒಂದು ವರ್ಷದ ಪ್ರತಿನಿಯೋಜನೆ ಅವಧಿಯು ಮುಕ್ತಾಯವಾದ ಕೂಡಲೇ ಮಾತೃ ಇಲಾಖೆಗೆ ಹಿಂದಿರುಗದಿದ್ದಲ್ಲಿ ಸಿಸಿಎ ನಿಯಮಗಳಿಗನುಸಾರ ಶಿಸ್ತು ಕ್ರಮಕ್ಕೆ ಬದ್ಧನಾಗಿರುತ್ತೇನೆ ಎಂಬುದಾಗಿ ಮುಚ್ಚಳಿಕೆ ಬರೆದುಕೊಟ್ಟಿರುತ್ತಾರೆ.

ಓದಲಾದ(4)ರ ಅ.ಸ ಪತ್ರದಲ್ಲಿ ಭಾಷಾಂತರ ನಿರ್ದೇಶನಾಲಯದಲ್ಲಿ ಕೆಲಸದ ಒತ್ತಡ ಅಧಿಕವಾಗಿದ್ದು ಅಧಿಕಾರಿಗಳ ಕೊರತೆಯಿರುವುದರಿಂದ ಶ್ರೀ ಅಬ್ದುಲ್ ಗಫಾರ್ ಇವರ ಸೇವೆಯನ್ನು ಮಾತೃ ಇಲಾಖೆಗೆ ಹಿಂದಿರುಗಿಸಬೇಕೆಂದು ಅನೇಕ ಬಾರಿ ಕೋರಲಾಗಿತ್ತು.

ಓದಲಾದ(5)ರ ಸರ್ಕಾರದ ಅಧಿಸೂಚನೆಯ ಪ್ರಕಾರ ಶ್ರೀ ಅಬ್ದುಲ್ ಗಫಾರ್ ಇವರನ್ನು ಈ ಇಲಾಖೆಗೆ ಹಿಂದಿರುಗಿಸಲಾಗಿದೆ. ತಕ್ಷಣ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವಂತೆ ನಿರ್ದೇಶಿಸಲಾಗಿತ್ತು.

ಶ್ರೀ ಅಬ್ದುಲ್ ಗಫಾರ್ ರವರು ಭಾಷಾಂತರ ನಿರ್ದೇಶನಾಲಯದಲ್ಲಿ ಕರ್ತವ್ಯಕ್ಕೆ ಹಾಜರಾಗಿಲ್ಲದ ಕಾರಣ ಓದಲಾದ(6)ರ ಭಾಷಾಂತರ ನಿರ್ದೇಶನಾಲಯದ ಅಧಿಕೃತ ಜ್ಞಾಪನಗಳಲ್ಲಿ ಶ್ರೀ ಅಬ್ದುಲ್ ಗಫಾರ್ ಇವರನ್ನು ಇಲಾಖೆಯ ಸೇವೆಯಿಂದ ಬಿಡುಗಡೆಗೊಳಿಸಿ ಮಾತೃ ಇಲಾಖೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳಲು ನಿರ್ದೇಶಕರು ಅಲ್ಪಸಂಖ್ಯಾಂತ ನಿರ್ದೇಶನಾಲಯ ಇವರಿಗೆ ಪತ್ರಗಳನ್ನು ಬರೆಯಲಾಗಿತ್ತು.

ಸರ್ಕಾರದ ಕಡತ ಸಂಖ್ಯೆ: ಸಂವ್ಯಶಾಇ 41 ಭಾನಿವಿ 2014 ರ ಟಿಪ್ಪಣಿ ಭಾಗ ಪ್ಯಾರಾ 91 ರಲ್ಲಿ ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಸಣ್ಣ ನೀರಾವರಿ ಸಚಿವರು ಸದರಿ ಅಧಿಕಾರಿಯನ್ನು ಅಮಾನತ್ತಿಡಲು ಸೂಚಿಸಿದ್ದರ ಮೇರೆಗೆ, ಶ್ರೀ ಅಬ್ದುಲ್ ಗಫಾರ್ ಇವರನ್ನು ಓದಲಾದ ಸರ್ಕಾರಿ ಆದೇಶ(7)ರನ್ವಯ ಅಮಾನತ್ತಿನಲ್ಲಿಡಲಾಯಿತು. ದಿನಾಂಕ: 02.09.2015ರ ಆದೇಶವನ್ನು ಸದರಿ ನೌಕರರಿಗೆ ಜಾರಿ ಮಾಡಿ ಸ್ವೀಕೃತಿಯನ್ನು ಕಳುಹಿಸುವಂತೆ ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆ ಇವರಿಗೆ ದಿನಾಂಕ: 02.09.2015 ರಂದೇ ಕಳುಹಿಸಿ ಸ್ವೀಕೃತಿ ಪಡೆಯಲಾಯಿತು ಹಾಗೂ ಸದರಿ ಅಧಿಕಾರಿಯವರ ನಿವಾಸಕ್ಕೂ ನೋಂದಾಯಿತ ಅಂಚೆಯ ಮೂಲಕ ಸದರಿ ಆದೇಶವನ್ನು ಕಳುಹಿಸಲಾಗಿತ್ತು. ದಿನಾಂಕ: 04.09.2015ರಂದು ಅದನ್ನು ಸ್ವೀಕರಿಸಲಾಯಿತು.

ಆದರೆ, ಅಮಾನತ್ತಿನ ಆದೇಶವನ್ನು ನೌಕರರಿಗೆ ಜಾರಿಮಾಡಲಾಗಿದೆಯೇ; ಇಲ್ಲವೇ; ಎಂಬ ಬಗ್ಗೆ ಮಾಹಿತಿಯನ್ನು ಒದಗಿಸದೇ ಓದಲಾದ(8)ರ ಅಧಿಕೃತ ಜ್ಞಾಪನದನ್ವಯ, ಶ್ರೀ ಅಬ್ದುಲ್ ಗಫಾರ್ ಇವರನ್ನು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಕರ್ತವ್ಯದಿಂದ ಬಿಡುಗಡೆ ಮಾಡಲಾಯಿತು. ಸದರಿ ಅಧಿಕೃತ ಜ್ಞಾಪನ ಪತ್ರದಂತೆ ನೌಕರರು ದಿನಾಂಕ: 10.09.2015ರ ಅಪರಾಹ್ನ ಕರ್ತವ್ಯಕ್ಕೆ ಹಾಜರಾಗುತ್ತಿರುವುದಾಗಿ ಮನವಿ ಸಲ್ಲಿಸಿರುತ್ತಾರೆ.

ಓದಲಾದ (9)ರ ಸರ್ಕಾರದ ಆದೇಶದಲ್ಲಿರುವ ಸೂಚನೆಯಂತೆ ಸದರಿ ನೌಕರರ ವಿರುದ್ಧ ಭಾಷಾಂತರ ನಿರ್ದೇಶನಾಲಯದಿಂದ ಓದಲಾದ(10)ರನ್ವಯ ದೋಷಾರೋಪಣಾ ಪಟ್ಟಿ ಜಾರಿ ಮಾಡಲಾಯಿತು.

ಸರ್ಕಾರವು ಏಕಕಡತ ಪದ್ಧತಿಯಲ್ಲಿ ದಿನಾಂಕ: 09.12.2015ರಂದು ರವಾನಿಸಿದ ಕಡತದಲ್ಲಿ ಸದರಿ ನೌಕರರ ಅಮಾನತ್ತನ್ನು ರದ್ದುಗೊಳಿಸಿ, ಭಾಷಾಂತರ ಇಲಾಖೆಯಲ್ಲಿ ಮುಂದುವರೆಯಲು ಸೂಚಿಸಲಾಯಿತು.

ಓದಲಾದ ಆದೇಶ(11)ರಲ್ಲಿ ಶ್ರೀ ಅಬ್ದುಲ್ ಗಫಾರ್ ಇವರ ಅಮಾನತ್ತನ್ನು ವಿಖಂಡನೆಗೊಳಿಸಿ ಇಲಾಖಾ ವಿಚಾರಣೆ ಬಾಕಿ ಇಟ್ಟು ಭಾಷಾಂತರ ನಿರ್ದೇಶನಾಲಯದ ಸಂಶೋಧನಾಧಿಕಾರಿ ಹುದ್ದೆಯಲ್ಲಿ ಕರ್ತವ್ಯಕ್ಕೆ ಪುನರ್‌ಸ್ಥಾಪಿಸಲಾಯಿತು.

ದಿನಾಂಕ: 1.12.2015ರಂದು ಶ್ರೀ ಅಬ್ದುಲ್ ಗಫಾರ್ ಇವರು ಸಮಜಾಯಿಷಿಯನ್ನು ಸಲ್ಲಿಸಿದರು. ಸದರಿಯವರು ದೋಷಾರೋಪಣಾ ಪಟ್ಟಿಗೆ ಸಲ್ಲಿಸಿದ ಸಮಜಾಯಿಷಿಯು ಸಮಂಜಸವಿಲ್ಲದ ಕಾರಣ, ಅವರ ವಿರುದ್ಧ ಶಿಸ್ತು ನಡವಳಿಗಳನ್ನು ಮುಂದುವರೆಸಿ, ದಂಡನೆ ವಿಧಿಸುವ ಕುರಿತಂತೆ ಪರಿಶೀಲಿಸಲು ಓದಲಾದ ಆದೇಶ ಸಂಖ್ಯೆ (12)ರಲ್ಲಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸಲಾಯಿತು.

ಓದಲಾದ (13)ಡಿ ವಿಚಾರಣಾ ವರದಿಯಲ್ಲಿ ದಿನಾಂಕ: 20.05.2016 ರಲ್ಲಿ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ, ತಮ್ಮ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಶ್ರೀ ಅಬ್ದುಲ್ ಗಫಾರ್ ಇವರ ವಿರುದ್ಧ ಮಾಡಲಾಗಿದ್ದ ಕರ್ನಾಟಕ ಸರ್ಕಾರಿ ನೌಕರರ (ನಡತೆ) ನಿಯಮಗಳು, 1966 ರ 3(1) (iii) ರನ್ವಯದ ಆರೋಪ ರುಜುವಾಗಿದೆ ಎಂದು ನಿರ್ಣಯಿಸಿರುತ್ತಾರೆ.

ಭಾಷಾಂತರ ನಿರ್ದೇಶನಾಲಯದ ಓದಲಾದ (14)ರ ಕಾರಣ ಕೇಳುವ ನೋಟಿಸನ್ನು ವಿಚಾರಣಾ ವರದಿಯ ಪ್ರತಿಯೊಂದಿಗೆ ಶ್ರೀ ಅಬ್ದುಲ್ ಗಫಾರ್ ಇವರಿಗೆ ಜಾರಿ ಮಾಡಿ ಇವರ ವಿವರಣೆಯನ್ನು ಕೇಳಲಾಯಿತು. ಸದರಿ ನೋಟಿಸ್‌ಗೆ ಶ್ರೀ ಅಬ್ದುಲ್ ಗಫಾರ್‌ರವರು ದಿನಾಂಕ: 25.05.2016 ರಂದು ವಿವರಣೆ ಸಲ್ಲಿಸಿರುತ್ತಾರೆ. ವಿಚಾರಣಾಧಿಕಾರಿಗಳು ವಿಚಾರಣೆಯ ಹಂತದಲ್ಲಿ ಪರಿಶೀಲಿಸಿರುವ ದಾಖಲೆಗಳು / ಚರ್ಚಿಸಿರುವ ಅಂಶಗಳು ಹಾಗೂ ದೋಷಾರೋಪಣೆ ಸಾಬೀತಾಗಿದೆ ಎಂಬ ನಿರ್ಣಯಕ್ಕೆ ಬಂದಿರುವುದಕ್ಕೆ ಕಾರಣವಾಗಿರುವ ಅಂಶಗಳನ್ನಾಗಲಿ; ವಿಚಾರಣಾ ವರದಿಯನ್ನಾಗಲೀ ತಿರಸ್ಕರಿಸಲು ದಾಖಲೆಗಳನ್ನಾಗಲಿ, ಕಾರಣಗಳನ್ನಾಗಲೀ / ಇತರ ಪುರಾವೆಗಳನ್ನಾಗಲೀ, ಸದರಿಯವರು ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ.

ವಿಚಾರಣಾ ಇಲಾಖೆಯ ವರದಿಯ ಆಧಾರದ ಮೇಲೆ ಶ್ರೀ ಅಬ್ದುಲ್ ಗಫಾರ್, ಸಂಶೋಧನಾಧಿಕಾರಿ ಇವರು ಜವಾಬ್ದಾರಿಯುತ ಸರ್ಕಾರಿ ನೌಕರರಿಗೆ ತಕ್ಕುದಲ್ಲದ ರೀತಿಯಲ್ಲಿ ವರ್ತಿಸಿ, ಕರ್ನಾಟಕ ಸರ್ಕಾರಿ ನೌಕರರ ನಡತೆ, ನಿಯಮಗಳು ರ ನಿಯಮ, 3(1) (iii) ಉಲ್ಲಂಘಿಸಿರುವ ಆರೋಪವು ಸಾಬೀತಾದ ಹಿನ್ನೆಲೆಯಲ್ಲಿ ಓದಲಾದ ಆದೇಶ (15)ರನ್ವಯ ಸದರಿಯವರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮರಹಿತವಾಗಿ ತಡೆ ಹಿಡಿಯುವ ದಂಡನೆಯನ್ನು ವಿಧಿಸಲಾಯಿತು.

ಸದರಿ ಆದೇಶದ ವಿರುದ್ಧ ಶ್ರೀ ಅಬ್ದುಲ್ ಗಫಾರ್, ಸಂಶೋಧನಾಧಿಕಾರಿ ಇವರು ಮೇಲ್ಮನವಿಯನ್ನು ಕೆ.ಸಿ.ಎಸ್ (ಸಿಸಿಎ) ನಿಯಮಗಳು 1957 ರ 22ನೇ ನಿಯಮದನ್ವಯ ಶಿಸ್ತು ಪ್ರಾಧಿಕಾರಿಯವರಿಗೆ ಸಲ್ಲಿಸಿ, ಸದರಿ ನಿಯಮಗಳ ನಿಯಮ 24 ರನ್ವಯ ಮೇಲ್ಮನವಿಯನ್ನು ಅಪೀಲು ಪ್ರಾಧಿಕಾರಿಯವರಿಗೆ ಕಳುಹಿಸಿಕೊಡುವಂತೆ ಕೋರಿದ ಹಿನ್ನೆಲೆಯಲ್ಲಿ ಓದಲಾದ ಪತ್ರ(16)ರೊಂದಿಗೆ ಸದರಿಯವರ ಮೇಲ್ಮನವಿಯನ್ನು ಮುಂದಿನ ಕ್ರಮಕ್ಕಾಗಿ ಸರ್ಕಾರಕ್ಕೆ ಕಳುಹಿಸಲಾಯಿತು.

ಸದರಿ ಮೇಲ್ಮನವಿಯನ್ನು ಪರಿಶೀಲಿಸಿ, ವಿಚಾರಣಾಧಿಕಾರಿ ಇವರ ವರದಿಯನ್ನು ಪರಿಶೀಲಿಸಲಾಯಿತು. ಸದರಿ ಅಧಿಕಾರಿ ನಿಯೋಜನೆ ಅವಧಿಯಾದ ಒಂದು ವರ್ಷ ಮುಗಿದ ಕೂಡಲೇ ಮಾತೃ ಇಲಾಖೆಗೆ ಹಿಂತಿರುಗಿ ಬರಲು ಯಾವುದೇ ಕ್ರಮ ಕೈಗೊಂಡಿಲ್ಲ. ಮಾತೃ ಇಲಾಖೆಗೆ ಹಿಂತಿರುಗಲು ಸರ್ಕಾರ ಬರೆದ ಪತ್ರ ಇವರ ಮನೆಯಲ್ಲಿ ಇವರ ಪತ್ನಿಗೆ ನೀಡಿದ್ದರೂ ನನಗೆ ತಲುಪಿಲ್ಲವೆಂದು ವಾದಿಸಿರುವುದು ಒಬ್ಬ ಉತ್ತಮ ಸರ್ಕಾರಿ ನೌಕರನ

ನಡವಳಿಕೆಗೆ ತಕ್ಕದ್ದಲ್ಲದರಿಂದ ಇದು ದುರ್ನಡತೆಯಾಗುತ್ತಿದೆ. ಆದರೂ, ಇವರು ಇನ್ನು ಮುಂದೆ ಸರಿಯಾದ ರೀತಿಯಲ್ಲಿ ನಡೆದುಕೊಳ್ಳಬೇಕೆಂಬ ಷರತ್ತಿಗೊಳಪಟ್ಟು ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಸಣ್ಣ ನೀರಾವರಿ ಸಚಿವರು ಸದರಿ ಅಧಿಕಾರಿಯವರಿಗೆ "ಈ ಬಾರಿ ವಾಗ್ದಂಡನೆ ವಿಧಿಸಿ ಪ್ರಕರಣ ಮುಕ್ತಾಯಗೊಳಿಸಿ" ಎಂದು ಆದೇಶಿಸಿರುತ್ತಾರೆ.

ಆದ್ದರಿಂದ ಈ ಆದೇಶ,

**ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 97 ಭಾನಿವಿ 2016, ಬೆಂಗಳೂರು, ದಿನಾಂಕ: 18.01.2017**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರವು, ಕರ್ನಾಟಕ ಸಿವಿಲ್ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರ ನಿಯಮ 18 ರನ್ವಯ ಮೇಲ್ಮನವಿ ಪ್ರಾಧಿಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಪ್ರಕರಣದಲ್ಲಿ ಶಿಸ್ತು ಪ್ರಾಧಿಕಾರಿಯಾದ ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯರವರು ನೀಡಿದ "**ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮರಹಿತವಾಗಿ ತಡೆ ಹಿಡಿಯುವ**" ಶಿಕ್ಷೆಯನ್ನು ರದ್ದುಪಡಿಸಿ ಇನ್ನು ಮುಂದೆ ಸರಿಯಾದ ರೀತಿಯಲ್ಲಿ ನಡೆದುಕೊಳ್ಳಬೇಕೆಂಬ ಷರತ್ತಿಗೊಳಪಟ್ಟು ಶ್ರೀ ಅಬ್ದುಲ್ ಗಫಾರ್, ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ ರವರಿಗೆ "**ವಾಗ್ದಂಡನೆ**" ನೀಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ದ್ವಾರಕನಾಥ್ ಬಾಬು**
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳ ಇಲಾಖೆ.

**P.R. 51**
**SC-30**

## COMMERCE & INDUSTRIES SECRETARIAT

### CORRIGENDUM

### No: CI 277 SPI 2016, Bengaluru, dated: 20.12.2016

**Sub:** Constitution of sub groups for Vision Group to focus on Industrial Growth in the State"- reg.

**Read:** Government Order No: CI 277 SPI 2016, dated: 10.11.2016.

In the Government Order No: CI 277 SPI 2016, dated: 10.11.2016 in place of Order portion, under the section Manufacturing Industry including Automobile and Aerospace, Serial No.16, the words;

| | | |
|---|---|---|
| 16 | Managing Director, Karnataka Udyog Mita, Khanija Bhavan, Bengaluru. | Member Secretary |

Shall be read as;

| | | |
|---|---|---|
| **16** | **Joint Director (Industrial Development), Directorate of Industries & Commerce, Bengaluru.** | **Member Secretary** |

The other terms and conditions remain the same as in the Government Order No: CI 277 SPI 2016, dated: 10.11.2016 read at above.

**P.R. 18**
**SC. 25**

By Order and in the name of the Governor of Karnataka,
**S. UMADEVI**
Desk Officer (Technical Cell),
Commerce & Industries Department.

## COMMERCE & INDUSTRIES SECRETARIAT

**Sub:** Amendment to the earlier approved proposal of M/s Pepsico India Holdings Pvt. Ltd., to establish Beverages & Snacks Manufacturing Unit at Adakanalli Industrial Area, Nanjangud Taluk, Mysuru District

**Read:**
1) 44th State High Level Clearance Committee (SHLCC) meeting held on 25.05.2016.
2) Government Order No. CI 171 SPI 2016, dated 08.06.2016.
3) 34th Land Audit Committee (LAC) meeting held on 26.11.2016.
4) Request from M/s Pepsico India Holdings Pvt. Ltd., dated 11.11.2016

**Preamble:**

The project proposal of M/s Pepsico India Holdings Pvt. Ltd., to establish a unit for manufacture of Beverages & Snacks, with an investment of Rs.590.00 crore, generating employment to about 900 persons at Adakanalli Industrial Area, Nanjangud Taluk, Mysuru District, was approved in the 44th SHLCC held on 25.05.2016, Accordingly Government order has been issued vide read at (2) above.

Now, the company in their e-mail dated 01.09.2016 and vide their letter no. PI/MGF/2016/11071111, dated 11.11.2016 has informed that subsequent to demand notice issued by KIADB vide their letter no. IADB/HO/allot/Secy/21223/ 3768/16-17, dated 14.06.2016, they have visited the industrial area and have done due diligence on two plots and short listed the plot nos. 408, 409, 410, 411, 412, 413, 414, 415, 416, 417, 418, 419 and 421 at Immavu Industrial Area, Mysuru District.

The company has informed that the land capex got approved by the board at New York and ready to make full payment for land immediately and take possession. The company would like to implement the project on fast track and start commercial production by March 2018.

Hence, company has requested the approval for change of location of the project from Adakanahalli Industrial Area to Immavu Industrial Area, Mysuru District in plot nos. 408, 409, 410, 411, 412, 413, 414, 415, 416, 417, 418, 419 and 421.

In the 35th SHLCC meeting held on 14.05.2014, the Committee has given powers to Additional Chief Secretary to Govt., Commerce & Industries Dept., to amend the Government Orders/approval letters, which require minor changes and to place such issues before the next SHLCC for ratification.

The request of the company was discussed in the 34th LAC held on 26.11.2016. The Committee resolved to recommend to SHLCC for approval for change of location of the project from Adakanahalli Industrial Area to Immavu Industrial Area, Nanjangud Taluk, Mysuru District in plot nos. 408, 409, 410, 411, 412, 413, 414, 415, 416, 417, 418, 419 and 421 (total 61 acres).

The proposal was examined in all aspects. Hence the following order.

**GOVERNMENT ORDER No. CI 171 SPI 2016, BENGALURU, DATED: 23.12.2016**

Under the circumstances explained above, the Government is pleased to accord approval to change of location from Adakanahalli Industrial Area, Nanjangud Taluk, Mysuru District to Immavu Industrial Area, Nanjangud Taluk, Mysuru District in plot nos. 408, 409, 410, 411, 412, 413, 414, 415, 416, 417, 418, 419 and 421 (total 61 acres) to M/s Pepsico India Holdings Pvt. Ltd.,

All other terms and conditions indicated in the Government Order dated: 08.06.2016 read at (2) above, remain unaltered.

**P.R. 30**
**SC. 25**

By Order and in the name of the Governor of Karnataka,
**S. UMADEVI**
Desk Officer (Technical Cell),
Commerce & Industries Department.

## ಇಂಧನ ಸಚಿವಾಲಯ

**ವಿಷಯ :** ಮಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಜಾಗೃತದಳದ ಪೊಲೀಸ್ ಅಧೀಕ್ಷಕರು ಹುದ್ದೆಯನ್ನು ರದ್ದುಗೊಳಿಸುವ ಹಾಗೂ ಜಾಗೃತದಳ ಪೊಲೀಸ್ ಠಾಣೆಗಳ ಅಧಿಕಾರಿ/ಸಿಬ್ಬಂದಿಗಳ ಸಂಖ್ಯೆಯನ್ನು ಕಡಿತಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ (ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ) ಸಂಖ್ಯೆ : HD 2 POP 2002, ದಿನಾಂಕ :16.04.2002.
2. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಆದೇಶ ಸಂಖ್ಯೆ :KPTCL/B5A/5605/2001–02, ದಿನಾಂಕ : 09.07.2002.
3. ವ್ಯವಸ್ಥಾಪಕ ನಿರ್ದೇಶಕರು, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ಇವರ ಪತ್ರಗಳ ಸಂಖ್ಯೆ: ಮವಿಸಕಂ/ವ್ಯ.ನಿ./ಆಕಾ/2015–16/1037, ದಿನಾಂಕ : 18.03.2016 ಮತ್ತು ಮವಿಸಕಂ/ವ್ಯ.ನಿ./ಆಕಾ/ 2016–17/31, ದಿನಾಂಕ : 26.04.2016.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಅಧಿಸೂಚನೆಯಲ್ಲಿ ಪೊಲೀಸ್ ಅಧೀಕ್ಷಕರು, ಜಾಗೃತದಳ, ಕೆ.ಪಿ.ಟಿ.ಸಿ.ಎಲ್., ಮಂಗಳೂರು ಇವರ ಕಾರ್ಯ ಕ್ಷೇತ್ರವನ್ನು ಕಂದಾಯ ಜಿಲ್ಲೆಗಳಾದ ಮೈಸೂರು, ಮಂಡ್ಯ, ಚಾಮರಾಜನಗರ, ಕೊಡಗು, ದಕ್ಷಿಣ ಕನ್ನಡ, ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲೆಗಳಿಗೆ ನಿಗದಿಪಡಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಆದೇಶದಲ್ಲಿ ಪೊಲೀಸ್ ಅಧೀಕ್ಷಕರು (ಜಾಗೃತದಳ) ಹುದ್ದೆಗಳನ್ನು ಮತ್ತು 21 ಜಾಗೃತದಳ ಪೊಲೀಸ್ ಠಾಣೆಗಳನ್ನು ಸೃಜಿಸಿ ಕಾರ್ಯ ವ್ಯಾಪ್ತಿಯನ್ನು ನಿಗದಿಪಡಿಸಲಾಗಿದ್ದು, ಅದರಲ್ಲಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಒಂದು ಪೊಲೀಸ್ ಅಧೀಕ್ಷಕರು, ಜಾಗೃತದಳ ಹುದ್ದೆಯನ್ನು ಹಾಗೂ 8 ಜಾಗೃತದಳ ಪೊಲೀಸ್ ಠಾಣೆಗಳನ್ನು ಸೃಜಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ ಇವರು ಮಂಗಳೂರು ವಿದ್ಯುತ್ ಸರಬರಾಜು ಕಂಪನಿಯು ಜೂನ್ 2002 ರಲ್ಲಿ ಪ್ರಾರಂಭವಾಗಿದ್ದು, 8 ಜಿಲ್ಲೆಗಳ ಕಾರ್ಯವ್ಯಾಪ್ತಿಯಲ್ಲಿ ಒಟ್ಟು 15 ಕಾರ್ಯ ಮತ್ತು ಪಾಲನ ವಿಭಾಗಗಳನ್ನು ಒಳಗೊಂಡಿತ್ತು. ನಂತರದಲ್ಲಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿಯು ಪುನರ್ ವಿಂಗಡಣೆಗೊಂಡು, ದಿನಾಂಕ :01.04.2005 ರಂದು ಹೊಸದಾಗಿ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ಕಂಪನಿ ಪ್ರಾರಂಭಗೊಂಡಿದ್ದು, ಇದರ ವ್ಯಾಪ್ತಿಗೆ 4 ಜಿಲ್ಲೆಗಳ 8 ಕಾರ್ಯ ಮತ್ತು ಪಾಲನ ವಿಭಾಗಗಳು ಸೇರಿರುತ್ತವೆ.

ಅವಿಭಜಿತ ಮಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಕಾರ್ಯವ್ಯಾಪ್ತಿಯು ವಿಶಾಲವಾಗಿದ್ದುದರಿಂದ ಜಾಗೃತದಳದ ಕಾರ್ಯಭಾರಗಳ ಮೇಲುಸ್ತುವಾರಿಗಾಗಿ ಪೊಲೀಸ್ ಅಧೀಕ್ಷಕರ ಹುದ್ದೆಯು ಅಗತ್ಯವಿತ್ತು. ಆದರೆ, ಪ್ರಸ್ತುತ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿಯ ವ್ಯಾಪ್ತಿಯು ದಕ್ಷಿಣ ಕನ್ನಡ, ಉಡುಪಿ, ಚಿಕ್ಕಮಗಳೂರು ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಮಾತ್ರ ಸೀಮಿತವಾಗಿದ್ದು, ಒಟ್ಟು 4 ಜಾಗೃತದಳ ಪೊಲೀಸ್ ಠಾಣೆಗಳನ್ನು ಒಳಗೊಂಡಿರುತ್ತದೆ. ಪ್ರಸ್ತುತ 4 ವೃತ್ತಗಳಲ್ಲಿ ಕಾರ್ಯನಿರ್ವಹಿಸುತ್ತಿರುವ 4 ಜಾಗೃತದಳ ಪೊಲೀಸ್ ಠಾಣೆಗಳ ವ್ಯಾಪ್ತಿಯಲ್ಲಿ ನಡೆಸಿದ ಸ್ಥಾವರಗಳ ಪರಿಶೀಲನಾ ಸಮಯದಲ್ಲಿ ವಿದ್ಯುತ್ ಕಳ್ಳತನ/ದುರುಪಯೋಗದ ಪ್ರಕರಣಗಳ ಸಂಬಂಧವಾಗಿ ದಾಖಲಾಗಿರುವ ಸಂಜ್ಞೇಯ ಪ್ರಕರಣಗಳ ಸಂಖ್ಯೆ ಬಹಳ ಕಡಿಮೆಯಾಗುತ್ತಿದ್ದು ಮತ್ತು ಆಡಳಿತಾತ್ಮಕ ವೆಚ್ಚವನ್ನು ಕಡಿಮೆ ಮಾಡುವ ಉದ್ದೇಶದಿಂದ ಹಾಗೂ 4 ಜಾಗೃತದಳ ಪೊಲೀಸ್ ಠಾಣೆಗಳ ಮೇಲುಸ್ತುವಾರಿ ಕಾರ್ಯವನ್ನು ಪೊಲೀಸ್ ಉಪಾಧೀಕ್ಷಕರ ಹಂತದ ಹುದ್ದೆಯಲ್ಲಿ ನಿರ್ವಹಿಸಬಹುದಾಗಿರುವುದರಿಂದ, ಈ ಹಿಂದೆ ಅವಿಭಜಿತ ಮಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಮಂಜೂರಾಗಿರುವ ಪೊಲೀಸ್ ಅಧೀಕ್ಷಕರ ಹುದ್ದೆಯು ಸೇರಿದಂತೆ, ಈ ಕೆಳಕಂಡ ಕೋಷ್ಟಕದಲ್ಲಿ ವಿವರಿಸಿರುವ ಒಟ್ಟು 21 ಹುದ್ದೆಗಳನ್ನು ರದ್ದುಪಡಿಸುವಂತೆ ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| ಕ್ರಮ ಸಂಖ್ಯೆ | ಪದನಾಮ | 4 ಜಾಗೃತ ಠಾಣೆಗಳಿಗೆ ಮಂಜೂರಾಗಿರುವ ಹುದ್ದೆಗಳ ಸಂಖ್ಯೆ | ರದ್ದುಪಡಿಸಬೇಕಾದ ಹುದ್ದೆಗಳ ಸಂಖ್ಯೆ |
|---|---|---|---|
| 1 | ಪೊಲೀಸ್ ಅಧೀಕ್ಷಕರು (ಜಾಗೃತದಳ), ಆಡಳಿತ ಕಛೇರಿ, ಮೆಸ್ಕಾಂ, ಮಂಗಳೂರು. | 01 | 01 |
| 2 | ಪೊಲೀಸ್ ನಿರೀಕ್ಷಕರು | 04 | 04 |
| 3 | ಪೊಲೀಸ್ ಹೆಡ್ ಕಾನ್ಸ್‌ಟೆಬಲ್ | 08 | 04 (ಪ್ರತಿ ಠಾಣೆಯ ತಲಾ 1 ಹುದ್ದೆಯಂತೆ) |
| 4 | ಪೊಲೀಸ್ ಕಾನ್ಸ್‌ಟೆಬಲ್ | 24 | 12 (ಪ್ರತಿ ಠಾಣೆಯ ತಲಾ 3 ಹುದ್ದೆಗಳಂತೆ) |
| ಒಟ್ಟು | | | 21 |

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 142 ಇಇಬಿ 2016, ಬೆಂಗಳೂರು, ದಿನಾಂಕ: 30.12.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತದ ಜಾಗೃತದಳ ಪೊಲೀಸ್ ಠಾಣೆಗಳಿಗೆ ಮಂಜೂರಾಗಿರುವ ಹುದ್ದೆಗಳಲ್ಲಿ ಈ ಕೆಳಕಂಡ ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಪದನಾಮ | ಕಾರ್ಯನಿರ್ವಹಿಸುತ್ತಿರುವ ಸ್ಥಳ | ರದ್ದುಪಡಿಸಿದ ಹುದ್ದೆಗಳ ಸಂಖ್ಯೆ |
|---|---|---|---|
| 1 | ಪೊಲೀಸ್ ಅಧೀಕ್ಷಕರು (ಜಾಗೃತದಳ) | ಆಡಳಿತ ಕಛೇರಿ, ಮೆಸ್ಕಾಂ, ಮಂಗಳೂರು | **01** |
| 2 | ಪೊಲೀಸ್ ನಿರೀಕ್ಷಕರು | ಜಾಗೃತದಳ ಪೊಲೀಸ್ ಠಾಣೆ, ಮಂಗಳೂರು/ಉಡುಪಿ/ಶಿವಮೊಗ್ಗ/ ಚಿಕ್ಕಮಗಳೂರು | **04** |
| 3 | ಪೊಲೀಸ್ ಹೆಡ್ ಕಾನ್ಸ್‌ಟೆಬಲ್ | | **04** (ಪ್ರತಿ ಠಾಣೆಯ ತಲಾ 1 ಹುದ್ದೆಯಂತೆ) |
| 4 | ಪೊಲೀಸ್ ಕಾನ್ಸ್‌ಟೆಬಲ್ | | **12** (ಪ್ರತಿ ಠಾಣೆಯ ತಲಾ 3 ಹುದ್ದೆಗಳಂತೆ) |
| ಒಟ್ಟು | | | **21** |

**P.R. 52**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

## HOME SECRETARIAT

**Sub:-** Constitution of Coastal State/UT level Committees in the Coastal States/UTs to monitor, manage and Steer the various issues of the Coastal Security at these levels- reg.

**Ref:-** Government Order No.HD 185 SST 2016, dated:30/7/2016.

**GOVERNMENT ORDER NO. HD 185 SST 2016, BENGALURU, DATED: 03/11/2016**

**ADDENDUM**

In the order portion of the Government Order No.HD 185 SST 2016, dated: 30.7.2016; after Sl.No.20 Representative of M/s Goa Shipyard Limited, Goa, following member shall be inserted and read as detailed.

| | | |
|---|---|---|
| 21) | Representative of Central Board of Excise & Customs (CBEC), Department of Revenue, Ministry of Finance. | Member |

**P.R. 48**

By Order and in the Name of the Governor of Karnataka
**K.PADMINI DEVI**
Under Secretary to Government
Home Department, (Law and Order)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀಮತಿ ಲೀನಾ ಡಿ. ಬೆರಳಚ್ಚುಗಾರರು, ಕಂದಾಯ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, ಇವರ ಜನ್ಮ ದಿನಾಂಕ ಹಾಗೂ ತಂದೆಯ ಹೆಸರನ್ನು ಸೇವಾ ಪುಸ್ತಕದಲ್ಲಿ ತಿದ್ದುಪಡಿ ಮಾಡಲು ಕೋರಿರುವ ಬಗ್ಗೆ.

**ಓದಲಾಗಿದೆ:** ನೌಕರರ ಮನವಿ ದಿನಾಂಕ:18-04-2016.

**ಪ್ರಸ್ತಾವನೆ:**

ಶ್ರೀಮತಿ ಲೀನಾ ಡಿ. ಬೆರಳಚ್ಚುಗಾರರು, ಕಂದಾಯ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, ಇವರು ಬೆರಳಚ್ಚುಗಾರ್ತಿಯಾಗಿ ಬೆಂಗಳೂರಿನ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ಮೊಬೈಲ್ ಟ್ರಾಫಿಕ್ ಕಂಟ್ರೋಲ್ ನ್ಯಾಯಾಲಯದಲ್ಲಿ ದಿನಾಂಕ:15-06-2013ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ನಂತರ ಸೂಕ್ತ ದ್ವಾರದ ಮೂಲಕ ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ಬೆರಳಚ್ಚುಗಾರ್ತಿ ಹುದ್ದೆಗೆ ಆಯ್ಕೆಯಾಗಿ ಸಚಿವಾಲಯದಲ್ಲಿ ದಿನಾಂಕ: 19-09-2014ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಮೇಲೆ ಓದಲಾದ ದಿನಾಂಕ: 18-04-2016ರ ಮನವಿಯಲ್ಲಿ ಎಸ್.ಎಸ್.ಎಲ್.ಸಿ ಅಂಕಪಟ್ಟಿಯಲ್ಲಿ ತಮ್ಮ ಜನ್ಮ ದಿನಾಂಕ:11-04-1985 ಎಂದು ಮತ್ತು ತಂದೆಯ ಹೆಸರು ಧರ್ಮೇಂದ್ರ ಬಿ.ಕೆ. ಎಂದು ನಮೂದಾಗಿರುತ್ತದೆ. ಆದರೆ, ಇವರು ದಿನಾಂಕ:11-04-1986 ರಂದು ಬೆಂಗಳೂರಿನ ಯಶವಂತಪುರದ ಕಾರ್ಪೋರೇಷನ್ ಮೆಟರ್ನಿಟಿ ಆಸ್ಪತ್ರೆಯಲ್ಲಿ ಧರ್ಮದೇವ ಬಿ.ಕೆ. ಮತ್ತು ಲಕ್ಷ್ಮಿ ಪಿ.ಎನ್., ಇವರ ಮಗಳಾಗಿ ಜನಿಸಿದ್ದಾಗಿ ತಿಳಿಸುತ್ತಾ, ತತ್ಸಂಬಂಧದ ಜನನ ಪ್ರಮಾಣ ಪತ್ರ ಮತ್ತು ತಮ್ಮ ತಂದೆಯ ಚುನಾವಣಾ ಗುರುತಿನ ಚೀಟಿಯ ಪ್ರತಿಯನ್ನು ಒದಗಿಸಿ, ತಮ್ಮ ಸೇವಾ ಪುಸ್ತಕದಲ್ಲಿ ಹುಟ್ಟಿದ ದಿನಾಂಕವನ್ನು 11-04-1985 ಎಂಬುದರ ಬದಲಾಗಿ ದಿನಾಂಕ 11-04-1986 ಎಂದು ಮತ್ತು ತಂದೆಯ ಹೆಸರನ್ನು ಧರ್ಮೇಂದ್ರ ಬಿ.ಕೆ., ಎಂಬುದರ ಬದಲಾಗಿ ಧರ್ಮದೇವ ಬಿ.ಕೆ. ಎಂದು ತಿದ್ದುಪಡಿ ಮಾಡಿಕೊಡಲು ಕೋರಿದ್ದಾರೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 131 ಆಬೆಸೇ 2016, ಬೆಂಗಳೂರು, ದಿನಾಂಕ: 19-09-2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀಮತಿ ಲೀನಾ ಡಿ. ಬೆರಳಚ್ಚುಗಾರರು, ಕಂದಾಯ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, ಇವರ ಜನ್ಮ ದಿನಾಂಕವನ್ನು ಸೇವಾ ಪುಸ್ತಕದಲ್ಲಿ ತಿದ್ದುಪಡಿ ಮಾಡುವ ಬಗ್ಗೆ ವಸ್ತುಸ್ಥಿತಿಯನ್ನು ಅರಿಯಲು The Karnataka State Servants (Determination of Age) Act, 1974 ರ ಕಲಂ 5(3) ರನ್ವಯ ವಿಚಾರಣೆಯನ್ನು ನಡೆಸುವ ಸಲುವಾಗಿ ಸಾಲಿಸಿಟರ್, ಕಾನೂನು ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಿದೆ.

ವಿಚಾರಣಾಧಿಕಾರಿಗಳು ಪ್ರಕರಣದ ವಿಚಾರಣೆಯನ್ನು ನಡೆಸಿ, 3(ಮೂರು) ತಿಂಗಳೊಳಗಾಗಿ ತಮ್ಮ ಸ್ಪಷ್ಟ ಅಭಿಪ್ರಾಯಗಳನ್ನೊಳಗೊಂಡ ವಿಚಾರಣಾ ವರದಿಯನ್ನು ನೇಮಕಾತಿ ಪ್ರಾಧಿಕಾರವಾಗಿರುವ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಸಲ್ಲಿಸುವಂತೆ ತಿಳಿಸಲಾಗಿದೆ ಹಾಗೂ ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯವರು ನಿಯಮಾನುಸಾರ ಸಂಚಿತ ಸಂಭಾವನೆಯನ್ನು ಪಡೆಯಲು ಅರ್ಹರಿರುತ್ತಾರೆ.

**P.R. 49**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಸಂತ ಎನ್.ನಾಯಕ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಆಡಳಿತ-2).

## COMMERCE & INDUSTRIES SECRETARIAT

**Sub:** Amendment to the earlier approved project proposal of M/s Prem Sugars & Chemicals Corporation Ltd., - reg.

**Read:**
1) Proceeding of the 158th State Level Single Window Clearance Committee meeting held on 17.09.1996.
2) Proceedings of the 33rd State High Level Clearance Committee (SHLCC) meeting held on 19.11.2013.
3) Government Order No. CI 27 SPI 2014, dated: 30.01.2014.
4) Government Order No. CI 27 SPI 2014, dated: 25.03.2014.
5) Proceedings of the 88th State Level Single Window Clearance Committee (SLSWCC) meeting held on 12.01.2016.
6) Government Order No. CI 27 SPI 2014, dated: 10.02.2016.
7) Proceedings of the 29th Land Audit Committee (LAC) meeting held on 17.05.2016.
8) Proceedings of the 92nd State Level Single Window Clearance Committee (SLSWCC) meeting held on 27.05.2016.

**Preamble:**

M/s Prem Sugars & Chemicals Corporation Ltd., had obtained approval from SLSWCC in 1996 for establishment of a White Cristal Sugar manufacturing unit with 2500 TCD capacity and 22 MW Co-gen capacity plant in 98.27 acres of land in Mandya District.

Subsequently M/s Prem Sugars & Chemicals Corporation Ltd., submitted a proposal for enhancing the crushing capacity from "2500 TCD to 5000 TCD, Co-gen capacity from 22 to 32 MW and establishment of 45000 KLPD Ethanol Plant", with an investment of Rs. 450.00 crores, in 98.27 acres of land in Bellur Hobli, Nagamangala Taluk, Mandya District. The proposal was discussed in the 174th Screening Committee meeting held on 21.12.2012.

Further, State High Level Clearance Committee in its 33rd meeting held on 19.11.2013 approved the proposal for establishment of 5000 TCD Sugar factory with 32 MW Co-generation subject to the final verdict of cases pending in the Hon'ble Courts. M/s Prem Sugars & Chemicals Corporation Ltd., submitted a letter to the Government on 20.01.2014 that no cases were pending before any Court of law in the State of Karnataka, between M/s Prem Sugars & Chemicals Corporation Ltd. and any other companies/individuals. Based on the submission made by the company Government Order referred above at (3) was issued.

Later, it has come to the notice of the Government that a Writ Appeal with No. 8040-8041/2012 is pending before the Hon'ble High Court with regard to the land proposed by M/s Prem Sugars & Chemicals Corporation Ltd. M/s Prem Sugars & Chemicals Corporation Ltd., has obtained the investment approval from the Government vide Government Order referred above at (3) by misrepresenting the fact.

As per the letter of the Additional Government Advocate dated: 25.03.2014, the Government has withdrawn the Government Order No. CI 27 SPI 2014, dated 30.01.2014 with immediate effect, on 25.03.2014 and it has been directed to KIADB to note the withdrawal of the approval and take appropriate action.

In the 33rd SHLCC meeting held on 19.11.2013 has given two years extension of time to implement the project, the subject was placed before the SLSWCC Committee for discussion and decision regarding continuation of Govt. Order No. CI 27 SPI 2014, dated 30.01.2014 & extension of time to the Company for implementation of the project.

In the 88th State Level Single Window Clearance Committee (SLSWCC) meeting held on 12.01.2016, the committee after detailed discussion resolved to approve the following:

1. The continuation of Government Order No. CI 27 SPI 2014, dt: 30.01.2014.
2. Extension of time for a period of 2 years to implement the project.
3. Clearances from Pollution Control Board to be obtained.
4. Restoration of all clearances and approvals which are accorded earlier.
5. Company to approach Commissioner for Cane Development and Director of Sugars for additional allocation of cane area.

Accordingly, the Government Order was issued vide Government Order No. CI 27 SPI 2014, dated: 10.02.2016 read at (6) above.

Now, the company requested that company could not implement the project for manufacture of sugar since the cane commissioner had informed that no cane area allocation can be made for the project and hence requested for change of activity from sugar project to development of "Industrial Park" to establish industries.

In the 29th Land Audit Committee meeting held on 17.05.2016, the Committee noted the opinion expressed by the Cane Commissioner during 28th LAC meeting that no cane area allocation could be made for the project. The Committee after detailed discussions resolved to recommend to SLSWCC for approval of change of activity from Sugar project to development of "Industrial Park" for establishment of industries.

Government has examined the recommendations made by the 92nd State Level Single Window Clearance Committee (SLSWCC) meeting held on 27.05.2016, in all aspects.

Hence the following order.

**GOVERNMENT ORDER No. CI 27 SPI 2014, BENGALURU, DATED: 14.06.2016**

Government is pleased to accord approval for change of activity from Sugar project to development of "Industrial Park" for establishment of Industries of M/s Prem Sugars & Chemicals Corporation Ltd.

All other terms and conditions indicated in the Government Order No. Government Order No. CI 27 SPI 2014, dated: 30.01.2014 read at (3) above, remain unaltered.

**P.R. 50**

By Order and in the name of the Governor of Karnataka
**S. UMADEVI**
Desk Officer (Technical Cell),
Commerce & Industries Department.

## FINANCE SECRETARIAT

**Sub:** Dearness Allowance to Teaching Staff on **UGC/AICTE/ICAR** scales of pay and Judicial Officers/Pensioners on **NJPC** pay scales- Revision of rates.

**Read:** (1) G.O. No. FD 10 SRP 2013, dated 20-05-2013.
(2) G.O. No. FD 12 SRP 2013 (II), dated 12-06-2013.
(3) G.O. No. FD 22 SRP 2013, dated 10-10-2013.
(4) G.O. No. FD 07 SRP 2014, dated 11-04-2014.
(5) G.O. No. FD 18 SRP 2014, dated 01-10-2014.
(6) G.O. No. FD 12 SRP 2015, dated 08-05-2015.
(7) G.O. No.FD 19 SRP 2015, dated: 08-10-2015.
(8) G.O. No.FD 18 SRP 2016, dated: 18-04-2016.

**GOVERNMENT ORDER NO. FD 34 SRP 2016, BENGALURU, DATED 28TH OCTOBER 2016**

R.N.I. No. KARBIL/2001/47147 POSTAL REGN. No. RNP/KA/BGS/2202/2017-19
Licensed to post without prepayment **WPP No. 297**



Government are pleased to sanction increase in the rates of Dearness Allowance to Teaching Staff who are on **UGC/AICTE/ICAR** scales of pay and to Judicial Officers on **NJPC** pay scales from the existing **125%** to **132%** of the basic pay with effect from **1st July 2016.**

2. For the purpose of this ord er, the term 'Basic Pay' means, the pay drawn by a Government employee in the UGC/AICTE/ICAR and NJPC scales of pay applicable to the post held by him.
3. Basic Pay shall not include any other emoluments.
4. Government are also pleased to sanction increase in the rates of Dearness Allowance to **NJPC Pensioners/Family Pensioners** from the existing **125% to 132%** of the basic pension/family pension with effect from **1st July 2016.**
5. The increase in Dearness Allowance admissible under this order is payable in cash until further orders.
6. The payment on account of Dearness Allowance involving fractions of 50 paise and above shall be rounded off to the next rupee and fractions less than 50 paise shall be ignored.
7. The Dearness Allowance will be shown as a distinct element of remuneration and will not be treated as pay for any purpose.

By Order and in the name of the Governor of Karnataka
**K.S.RAJALAKSHMI**
Under Secretary to Government,
Finance Department (Services-2).

## ಆರ್ಥಿಕ ಸಚಿವಾಲಯ

**ವಿಷಯ :** **ಯುಜಿಸಿ/ಐಸಿಎಆರ್/ಎಐಸಿಟಿಇ** ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿರುವ ಬೋಧಕ ವರ್ಗದವರಿಗೆ ಮತ್ತು **ಎನ್‌ಜೆಪಿಸಿ** ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ/**ಎನ್‌ಜೆಪಿಸಿ ನಿವೃತ್ತಿ ವೇತನದಾರರಿಗೆ** ತುಟ್ಟಿ ಭತ್ಯೆಯನ್ನು ಮಂಜೂರು ಮಾಡುವ ಕುರಿತು.

**ಓದಲಾಗಿದೆ :**
(1) ಸ.ಆ. ಸಂಖ್ಯೆ: ಎಫ್‌ಡಿ 10 ಎಸ್‌ಆರ್‌ಪಿ 2013, ದಿನಾಂಕ: 20-05-2013.
(2) ಸ.ಆ. ಸಂಖ್ಯೆ: ಎಫ್‌ಡಿ 12 ಎಸ್‌ಆರ್‌ಪಿ 2013(II), ದಿನಾಂಕ: 12-06-2013.
(3) ಸ.ಆ. ಸಂಖ್ಯೆ: ಎಫ್‌ಡಿ 22 ಎಸ್‌ಆರ್‌ಪಿ 2013, ದಿನಾಂಕ: 10-10-2013.
(4) ಸ.ಆ. ಸಂಖ್ಯೆ: ಎಫ್‌ಡಿ 07 ಎಸ್‌ಆರ್‌ಪಿ 2014, ದಿನಾಂಕ: 11-04-2014.
(5) ಸ.ಅ. ಸಂಖ್ಯೆ: ಎಫ್‌ಡಿ 18 ಎಸ್‌ಆರ್‌ಪಿ 2014, ದಿನಾಂಕ: 01-10-2014.
(6) ಸ.ಅ. ಸಂಖ್ಯೆ: ಎಫ್‌ಡಿ 12 ಎಸ್‌ಆರ್‌ಪಿ 2015, ದಿನಾಂಕ: 08-05-2015.
(7) ಸ.ಅ. ಸಂಖ್ಯೆ: ಎಫ್‌ಡಿ 19 ಎಸ್‌ಆರ್‌ಪಿ 2015 ದಿನಾಂಕ: 08-10-2015.
(8) ಸ.ಅ. ಸಂಖ್ಯೆ: ಎಫ್‌ಡಿ 18 ಎಸ್‌ಆರ್‌ಪಿ 2016 ದಿನಾಂಕ: 18-04-2016

**ಸರ್ಕಾರಿ ಆದೇಶ ಸಂಖ್ಯೆ: ಆಇ 34 ಎಸ್‌ಆರ್‌ಪಿ 2016, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2016.**

**ಯುಜಿಸಿ/ಎಐಸಿಟಿಇ/ಐಸಿಎಆರ್** ವೇತನ ಶ್ರೇಣಿಗಳಲ್ಲಿರುವ ಬೋಧಕ ಸಿಬ್ಬಂದಿಗಳಿಗೆ ಮತ್ತು **ಎನ್‌ಜೆಪಿಸಿ** ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ವೇತನದ **ಶೇ.125** ರಿಂದ **ಶೇ.132**ಕ್ಕೆ ಹೆಚ್ಚಿಸಿ ದಿನಾಂಕ **1ನೇ ಜುಲೈ 2016** ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸರ್ಕಾರವು ಹರ್ಷಿಸುತ್ತದೆ.

2. ಈ ಆದೇಶದ ಉದ್ದೇಶಗಳಿಗಾಗಿ **'ಮೂಲ ವೇತನ'** ಎಂದರೆ ಸರ್ಕಾರಿ ನೌಕರನು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವ ಯುಜಿಸಿ/ಐಸಿಎಆರ್/ಎಐಸಿಟಿಇ ಮತ್ತು ಎನ್‌ಜೆಪಿಸಿ ವೇತನ ಶ್ರೇಣಿಗಳಲ್ಲಿ ಪಡೆಯುವ ವೇತನ.
3. ಮೂಲ ವೇತನಕ್ಕೆ ಇನ್ನಾವುದೇ ಉಪಲಬ್ದಗಳನ್ನು ಸೇರಿಸತಕ್ಕದ್ದಲ್ಲ.
4. **ಎನ್‌ಜೆಪಿಸಿ ನಿವೃತ್ತಿ ವೇತನದಾರರು/ಕುಟುಂಬ ನಿವೃತ್ತಿ ವೇತನದಾರರಿಗೆ** ಹಾಲಿ ಲಭ್ಯವಿರುವ ತುಟ್ಟಿ ಭತ್ಯೆಯ ದರವನ್ನು ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದ **ಶೇ.125** ರಿಂದ **ಶೇ.132** ಕ್ಕೆ ಹೆಚ್ಚಿಸಿ ದಿನಾಂಕ **1ನೇ ಜುಲೈ 2016** ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸಹ ಸರ್ಕಾರವು ಹರ್ಷಿಸುತ್ತದೆ.
5. ಈ ಆದೇಶದ ಮೇರೆಗೆ ಮಂಜೂರಾಗಿರುವ ತುಟ್ಟಿ ಭತ್ಯೆಯನ್ನು ಮುಂದಿನ ಆದೇಶ ಹೊರಡಿಸುವವರೆಗೆ ನಗದಾಗಿ ಪಾವತಿ ಮಾಡಲಾಗುವುದು.
6. ತುಟ್ಟಿ ಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಕಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.
7. ತುಟ್ಟಿ ಭತ್ಯೆಯನ್ನು ಸಂಭಾವನೆಯ ವಿಶಿಷ್ಟ ಅಂಶವಾಗಿ ತೋರಿಸುವುದು ಮತ್ತು ಯಾವುದೇ ಉದ್ದೇಶಕ್ಕಾಗಿ ಇದನ್ನು ವೇತನ ಎಂದು ಪರಿಗಣಿಸಲಾಗುವುದಿಲ್ಲ.

**P.R. 24**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್.ರಾಜಲಕ್ಷ್ಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು-2).

*ಮುದ್ರಕರು ಹಾಗೂ ಪ್ರಕಾಶಕರು:-* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59.